# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ)

ಹದಿನೈದನೇ ಅಧಿವೇಶನ

## ಕಾರ್ಯಕಲಾಪಗಳ ಪಟ್ಟಿ

ಮಂಗಳವಾರ, ದಿನಾಂಕ 14ನೇ ಫೆಬ್ರವರಿ, 2023

(ಸಮಯ: ಬೆಳಿಗ್ಗೆ 11.00 ಗಂಟೆಗೆ)

-----

### 1. ಪ್ರಶ್ನೋತ್ತರ

| | | |
|---|---|---|
| ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು | : | ಎರಡನೇ ಪಟ್ಟಿ |
| ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು | : | ಎರಡನೇ ಪಟ್ಟಿ |

### 2. ರಾಜ್ಯಪಾಲರ ಭಾಷಣಕ್ಕೆ ಸಂಬಂಧಿಸಿದ ವಂದನಾರ್ಪಣಾ ಪ್ರಸ್ತಾವ

"ದಿನಾಂಕ 10ನೇ ಫೆಬ್ರವರಿ, 2023ರಂದು ಶ್ರೀ ಸಿ.ಟಿ. ರವಿ ರವರು ಸೂಚಿಸಿ, ಶ್ರೀ ಪಿ. ರಾಜೀವ್ ರವರು ಅನುಮೋದಿಸಿದ ಕೆಳಕಂಡ ಪ್ರಸ್ತಾವದ ಮೇಲೆ ಮುಂದುವರೆದ ಚರ್ಚೆ (ಎರಡನೇ ದಿನ).

> "ದಿನಾಂಕ 10ನೇ ಫೆಬ್ರವರಿ, 2023 ರಂದು ವಿಧಾನಮಂಡಲದ ಉಭಯ ಸದನಗಳ ಸದಸ್ಯರುಗಳನ್ನುದ್ದೇಶಿಸಿ ದಯಪಾಲಿಸಿದ ಭಾಷಣಕ್ಕಾಗಿ ಈ ಅಧಿವೇಶನದಲ್ಲಿ ಸೇರಿರುವ ವಿಧಾನಸಭೆಯ ಸದಸ್ಯರಾದ ನಾವು ಮಾನ್ಯ ರಾಜ್ಯಪಾಲರವರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸಲು ಅಪ್ಪಣೆ ಕೋರುತ್ತೇವೆ".

..2/

## 3. ಗಮನ ಸೆಳೆಯುವ ಸೂಚನೆಗಳು

1) **ಶ್ರೀ ಈ. ತುಕಾರಾಮ್ ಅವರು** – ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕಿನ ಕುಡುತಿನಿಯಲ್ಲಿ ಕಾರ್ಖಾನೆಗಳನ್ನು ಸ್ಥಾಪಿಸಲು ಕೆ.ಐ.ಎ.ಡಿ.ಬಿ. ವತಿಯಿಂದ ಕಂಪನಿಗಳಿಗೆ ನೀಡಿರುವ ರೈತರ ಮತ್ತು ಸರ್ಕಾರಿ ಭೂಮಿಯನ್ನು ಉಪಯೋಗಿಸದಿರುವುದರಿಂದ ಸದರಿ ಭೂಮಿಯನ್ನು ಅವರಿಂದ ಹಿಂಪಡೆದು ಕಾರ್ಖಾನೆಯನ್ನು ಸ್ಥಾಪಿಸಲು ಬೇರೆಯವರಿಗೆ ಅನುವು ಮಾಡಿಕೊಡಲು ಅಥವಾ ರೈತರಿಗೆ ಹಿಂದಿರುಗಿಸಿ ಕೃಷಿ ಚಟುವಟಿಕೆಗಳಿಗೆ ಅನುಕೂಲ ಮಾಡಿಕೊಡುವ ಬಗ್ಗೆ ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರ ಗಮನ ಸೆಳೆಯುವುದು.

2) **ಶ್ರೀ ಸಿ.ಎನ್. ಬಾಲಕೃಷ್ಣ ಅವರು** – ಶ್ರವಣಬೆಳಗೊಳ ವಿಧಾನಸಭಾ ಕ್ಷೇತ್ರದಲ್ಲಿ ಕಾರೇಹಳ್ಳಿ ಪೊಲೀಸ್ ಉಪ ಠಾಣೆಯು ಶಿಥಿಲಾವಸ್ಥೆಯಲ್ಲಿರುವುದರಿಂದ ನೂತನ ಪೊಲೀಸ್ ಉಪ ಠಾಣೆಯನ್ನು ಮಂಜೂರು ಮಾಡುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

3) **ಡಾ. ಅಜಯ ಧರ್ಮಸಿಂಗ್ ಅವರು** – ಜೇವರ್ಗಿ ಪಟ್ಟಣದಲ್ಲಿ ಅಪೂರ್ಣಗೊಂಡಿರುವ ಅಲ್ಪಸಂಖ್ಯಾತರ ಸಮುದಾಯ ಭವನ ಕಟ್ಟಡ ಕಾಮಗಾರಿಯನ್ನು ಪೂರ್ಣಗೊಳಿಸಲು ಅವಶ್ಯವಿರುವ ಅನುದಾನ ಬಿಡುಗಡೆ ಮಾಡುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

4) **ಶ್ರೀ ರವೀಂದ್ರ ಶ್ರೀಕಂಠಯ್ಯ ಅವರು** – ಶ್ರೀರಂಗಪಟ್ಟಣ ವಿಧಾನಸಭಾ ವ್ಯಾಪ್ತಿಯಲ್ಲಿನ ಗಾಮನಹಳ್ಳಿ ಸೇರಿದಂತೆ ಇತರೆ ಹಳ್ಳಿಗಳಿಗೆ ಮಂಜೂರಾಗಿರುವ ಕುಡಿಯುವ ನೀರಿನ ಯೋಜನೆಗೆ ಪೈಪ್‌ಲೈನ್ ಅಳವಡಿಸಲು ಸಲ್ಲಿಸಿರುವ ಪ್ರಸ್ತಾವನೆಗೆ ಅರಣ್ಯ ಇಲಾಖೆಯಿಂದ ಅನುಮತಿ ದೊರಕದೆ ಇರುವುದರಿಂದ ಸಾರ್ವಜನಿಕರಿಗೆ ಕುಡಿಯುವ ನೀರಿನ ಸಮಸ್ಯೆಯಾಗುತ್ತಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

5) **ಶ್ರೀ ಕೆ. ಮಹದೇವ ಅವರು** – ರಾಜ್ಯದಲ್ಲಿ ಐದು ಎಕರೆಗಿಂತ ಹೆಚ್ಚಿನ ಜಮೀನು ಹೊಂದಿರುವ ರೈತರಿಂದ ಎಂ.ಎಸ್.ಪಿ. ದರದಲ್ಲಿ ರಾಗಿ ಖರೀದಿಸುವ ಮೂಲಕ ರಾಗಿ ಖರೀದಿ ನಿಗದಿತ ಗುರಿ ತಲುಪಲು ಹಾಗೂ ರೈತರಿಗೆ ಅನುಕೂಲ ಮಾಡಿಕೊಡುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

6) **ಶ್ರೀ ಶಿವಾನಂದ ಎಸ್. ಪಾಟೀಲ ಅವರು** – ಕೃಷ್ಣಾ ಮೇಲ್ದಂಡೆ ಯೋಜನೆಯಡಿ ಹಂತ–1 ಮತ್ತು ಹಂತ–2ರಲ್ಲಿ ನಿರ್ಮಿಸಿ ಹಸ್ತಾಂತರಗೊಂಡಿರುವ ಬಸವನಬಾಗೇವಾಡಿ ತಾಲ್ಲೂಕಿನ ಪುನರ್ ವಸತಿ ಕೇಂದ್ರಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಅಗತ್ಯವಿರುವ ಅನುದಾನವನ್ನು ಮಂಜೂರು ಮಾಡುವ ಬಗ್ಗೆ ಮಾನ್ಯ ಜಲಸಂಪನ್ಮೂಲ ಸಚಿವರ ಗಮನ ಸೆಳೆಯುವುದು.

7) **ಶ್ರೀ ಡಿ.ಎಸ್. ಹೂಲಗೇರಿ ಅವರು** – ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನ ನಾರಾಯಣಪುರ ಬಲದಂಡೆ ಮುಖ್ಯ ಕಾಲುವೆಯ ಆಧುನೀಕರಣದ ಕಾಮಗಾರಿಯ ಅಂದಾಜು ಪಟ್ಟಿಯ ಗಾತ್ರವನ್ನು ಉದ್ದೇಶಪೂರ್ವಕವಾಗಿ ಹೆಚ್ಚಿಸಿರುವ ಅಧಿಕಾರಿಗಳ ವಿರುದ್ಧ ಹಾಗೂ ಕಾಮಗಾರಿಯಲ್ಲಿ ನಡೆದಿರುವ ಅವ್ಯವಹಾರಗಳ ಬಗ್ಗೆ ಮಾನ್ಯ ಜಲಸಂಪನ್ಮೂಲ ಸಚಿವರ ಗಮನ ಸೆಳೆಯುವುದು.

..3/

8) **ಶ್ರೀ ಸುಬ್ಬಾರೆಡ್ಡಿ ಎಸ್.ಎನ್. ಅವರು** – ಬಾಗೇಪಲ್ಲಿ ತಾಲ್ಲೂಕಿನ ದೇವರಗುಡಿಪಲ್ಲಿ ವ್ಯವಸಾಯ ಸೇವಾ ಸಹಕಾರ ಸಂಘದ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆಯ ಸಂದರ್ಭದಲ್ಲಿ ಕಾನೂನು ಉಲ್ಲಂಘನೆ ಮಾಡಿ ಚುನಾವಣೆ ನಡೆಸಿದ ಜಿಲ್ಲಾ ಸಹಕಾರ ಇಲಾಖೆಯ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಸಹಕಾರ ಸಚಿವರ ಗಮನ ಸೆಳೆಯುವುದು.

9) **ಶ್ರೀ ಎಂ. ಕೃಷ್ಣಾರೆಡ್ಡಿ ಅವರು** – ರಾಜ್ಯದಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ವೇತನ ಪರಿಷ್ಕರಣೆ ಹಾಗೂ ನೇಮಕಾತಿ ಮಾಡಿಕೊಳ್ಳುವ ನಿಯಮದ ಬಗ್ಗೆ ಮಾನ್ಯ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ ಸಚಿವರ ಗಮನ ಸೆಳೆಯುವುದು.

10) **ಶ್ರೀ ಬಸನಗೌಡ ದದ್ದಲ ಅವರು** – ರಾಯಚೂರು ಗ್ರಾಮೀಣ ವಿಧಾನಸಭಾ ಕ್ಷೇತ್ರಕ್ಕೆ ಸಂಚಿತ ವಂಚಿತತೆ ಸೂಚ್ಯಂಕ (ಸಿಡಿಐ ಇಂಡೆಕ್ಸ್ ಕೋಡ್) ವನ್ನು ನೀಡಿ ಪರಿಷ್ಕರಣೆ ಮಾಡಿ ನಿಗದಿಪಡಿಸುವ ಮೂಲಕ ಕ್ಷೇತ್ರದ ಅಭಿವೃದ್ಧಿಗೆ ಅನುಕೂಲ ಮಾಡಿಕೊಡುವ ಬಗ್ಗೆ ಮಾನ್ಯ ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರ ಗಮನ ಸೆಳೆಯುವುದು.

11) **ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ ಅವರು** – ಭೂ ಮಾಪನ ಸಹಾಯಕ ನಿರ್ದೇಶಕರ ಕಛೇರಿ ಮತ್ತು ಕಿತ್ತೂರು ತಾಲ್ಲೂಕಿಗೆ ಪ್ರತ್ಯೇಕವಾಗಿ ಸರ್ವೇಯರ್‌ಗಳ ನೇಮಕ ಮಾಡಿ ರೈತರು ಹಾಗೂ ಸಾರ್ವಜನಿಕರಿಗೆ ಅನುಕೂಲ ಮಾಡಿಕೊಡುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

12) **ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ ಅವರು** – ಇಂಡಿ ಪಟ್ಟಣದಲ್ಲಿ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ ಭವನ ನಿರ್ಮಾಣ ಮಾಡಲು ಅನುದಾನ ಮಂಜೂರು ಮಾಡುವ ಬಗ್ಗೆ ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರ ಗಮನ ಸೆಳೆಯುವುದು.

13) **ಶ್ರೀ ನಂಜೇಗೌಡ ಕೆ.ವೈ. ಅವರು** – ರಾಜ್ಯದಲ್ಲಿ ರೈತರು 20–30 ವರ್ಷಗಳಿಂದ ಜಮೀನುಗಳಲ್ಲಿ ಸ್ವಾಧೀನಾನುಭವದಲ್ಲಿದ್ದು, ಭೂ ಮಾಲೀಕ ಮರಣ ಹೊಂದಿದಾಗ, ಅವನ ಕಾನೂನುಬದ್ಧ ವಾರಸುದಾರರಿಗೆ ಪೌತಿವಾರಸ್ಸು ಖಾತೆ ಬದಲಾವಣೆ ಮಾಡುವಾಗ ರೈತರು ಸಂಕಷ್ಟ ಅನುಭವಿಸುತ್ತಿರುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

14) **ಶ್ರೀ ಬಂಡೆಪ್ಪ ಖಾಶೆಂಪೂರ ಅವರು** – ಕಾರಂಜಾ ಜಲಾಶಯದ ಸಂತ್ರಸ್ತರಿಗೆ ವೈಜ್ಞಾನಿಕವಾಗಿ ದೊರಕಬೇಕಾದ ಪರಿಹಾರವನ್ನು ನೀಡುವ ಬಗ್ಗೆ ಮಾನ್ಯ ಜಲಸಂಪನ್ಮೂಲ ಸಚಿವರ ಗಮನ ಸೆಳೆಯುವುದು.

15) **ಶ್ರೀ ಸಿ.ಟಿ. ರವಿ ಅವರು** – ಚಿಕ್ಕಮಗಳೂರು ವೈದ್ಯಕೀಯ ಮಹಾವಿದ್ಯಾಲಯಕ್ಕೆ ಉಪನ್ಯಾಸಕರ ನೇಮಕಾತಿ ಆಗದೆ ಇರುವುದರಿಂದ ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿರುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರ ಗಮನ ಸೆಳೆಯುವುದು.

**ಎಂ.ಕೆ.ವಿಶಾಲಾಕ್ಷಿ**
**ಕಾರ್ಯದರ್ಶಿ**

---